# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 502
2. ಸದಸ್ಯರ ಹೆಸರು : ಶ್ರೀ ಎಸ್.ನಾಗರಾಜು (ಸಂದೇಶ್ ನಾಗರಾಜು)
3. ಉತ್ತರಿಸಬೇಕಾದ ದಿನಾಂಕ : 16-09-2021

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ನಂಜನಗೂಡು ತಾಲ್ಲೂಕು ನರಸಾಂಬುದಿ ಕೆರೆಯ ವಿಸ್ತೀರ್ಣ ಎಷ್ಟು; ಈ ಕೆರೆಯಿಂದ ನೀರಾವರಿಗೆ ಒಳಪಡುವ ಕೃಷಿ ಭೂಮಿಯ ವಿಸ್ತೀರ್ಣ ಎಷ್ಟು; ಕಳೆದ 8-10 ವರ್ಷಗಳಿಂದ ನೀರು ತುಂಬದೇ ಇರುವ ಈ ಕೆರೆಯ ಸರ್ವೆ ನಡೆಸಿ, ಅತಿಕ್ರಮಣವಾಗಿದ್ದಲ್ಲಿ, ಅದನ್ನು ತೆರವುಗೊಳಿಸಿ ಹೂಳು ತೆಗೆದು ಏರಿಯನ್ನು ಭದ್ರಪಡಿಸಿ, ನುಗು ಕಾಲುವೆಯಿಂದ ಅಥವಾ ಬೇರೆ ಏತ ನೀರಾವರಿ ಯೋಜನೆಯಿಂದ ಈ ಕೆರೆಗೆ ನೀರು ಹರಿಸಲು ಕ್ರಮ ಜರುಗಿಸಲಾಗುವುದೇ; | ನಂಜನಗೂಡು ತಾಲ್ಲೂಕು ನರಸಾಂಬುದಿ ಕೆರೆಯ ವಿಸ್ತೀರ್ಣವು 150.14 ಹೆ (370.99 ಎಕರೆ) ಇದ್ದು, 213.19 ಎಂ.ಸಿ.ಎಫ್.ಟಿ ಸಂಗ್ರಹಣಾ ಸಾಮರ್ಥ್ಯ ಹೊಂದಿರುತ್ತದೆ.<br><br>ಸದರಿ ಕೆರೆಯ ಕೃಷಿ ಅಚ್ಚುಕಟ್ಟು ಪ್ರದೇಶವು 32.37 ಹೆಕ್ಟೇರ್ (80.00 ಎಕರೆ) ಇದ್ದು, ನುಗು ಮೇಲ್ದಂಡೆ ನಾಲೆಯ ಅಚ್ಚುಕಟ್ಟಿನ ಪ್ರದೇಶದಲ್ಲಿ ಸೇರ್ಪಡೆಯಾಗಿರುತ್ತದೆ.<br><br>ನರಸಾಂಬುದಿ ಕೆರೆಯ ಸರ್ವೆ ಕಾರ್ಯವನ್ನು ಈಗಾಗಲೇ ಕೈಗೊಂಡಿದ್ದು, ಯಾವುದೇ ಅತಿಕ್ರಮಣ ಕಂಡುಬಂದಿರುವುದಿಲ್ಲ.<br><br>ಮುಂದುವರೆದು, ನುಗು ಜಲಾನಯನ ಪ್ರದೇಶದಲ್ಲಿ ನಿರೀಕ್ಷಿತ ಮಟ್ಟದಲ್ಲಿ ಮಳೆಯಾಗದೇ ಇರುವುದರಿಂದ, ನಂಜನಗೂಡು ತಾಲ್ಲೂಕು ಹೆಗ್ಗಡಹಳ್ಳಿ ಗ್ರಾಮದ ಹತ್ತಿರ ಕಬಿನಿ ನದಿಯಿಂದ ನೀರನ್ನು ಎತ್ತಿ ಕುಡಿಯುವ ನೀರಿಗಾಗಿ ನಂಜನಗೂಡು ತಾಲ್ಲೂಕಿನ 7 ಸಂಖ್ಯೆಯ ಕೆರೆಗಳನ್ನು ತುಂಬಿಸಲು ಯೋಜಿಸಲಾಗಿದೆ. ಸದರಿ ಯೋಜನೆಯಲ್ಲಿ ನರಸಾಂಬುದಿ ಕೆರೆಗೆ ನೀರು ತುಂಬಿಸುವ, ಹೂಳು ತೆಗೆಯುವ, ಏರಿ ಮತ್ತು ಕೋಡಿಗಳನ್ನು ಅಭಿವೃದ್ಧಿಪಡಿಸುವ ಕಾಮಗಾರಿಗಳೂ ಸೇರ್ಪಡೆಗೊಂಡಿವೆ. |
| ಆ | ಈ ಕೆರೆಯು ತುಂಬಿ ಕೋಡಿ ಬಿದ್ದಲ್ಲಿ, ಅದರಿಂದ ಮುಂದಿನ ನಾಲ್ಕಾರು ಗ್ರಾಮಗಳ ಕೆರೆಗಳು ಕೂಡಾ ತುಂಬಿ ರೈತಾಪಿ ಜನಗಳಿಗೆ ನೀರಾವರಿ ಬೇಸಾಯಕ್ಕೆ ಮತ್ತು ಜನ ಜಾನುವಾರುಗಳಿಗೆ ಕುಡಿಯುವ ನೀರಿಗೆ ಅನುಕೂಲವಾಗುವುದರಿಂದ ಈ ಬಗ್ಗೆ ಶೀಘ್ರ ಗಮನಹರಿಸಿ ಕ್ರಮ ಜರುಗಿಸಲಾಗುವುದೇ? | ಸದರಿ ಕಾಮಗಾರಿಯ ರೂ.80.00 ಕೋಟಿ ಮೊತ್ತದ ಅಂದಾಜಿಗೆ ಈಗಾಗಲೇ ದಿನಾಂಕ:01-07-2021 ರ ಸರ್ಕಾರಿ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಿದ್ದು, ಕಾವೇರಿ ನೀರಾವರಿ ನಿಗಮದಲ್ಲಿ ಟೆಂಡರ್ ಪ್ರಕ್ರಿಯೆ ಜಾರಿಯಲ್ಲಿದೆ. |

*ಸಂಖ್ಯೆ:ಜಸಂಇ 143 ಎನ್‌ಎಲ್‌ಎ 2021*

(ಗೋವಿಂದ ಎಂ. ಕಾರಜೋಳ)
ಜಲಸಂಪನ್ಮೂಲ ಸಚಿವರು